# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 577 |
| ಸದಸ್ಯರ ಹೆಸರು | : | ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 24.09.2020 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿರವರು |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಜನರಿಗೆ ಹಲವಾರು ಬಡಾವಣೆಗಳನ್ನು ನಿರ್ಮಿಸಿದ್ದು, ನಿರ್ಮಿಸಲಾಗಿರುವ ಅನೇಕ ಬಡಾವಣೆಗಳಲ್ಲಿ ಮೂಲಭೂತ ಸೌಲಭ್ಯಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಬಂದಿದ್ದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ನಿರ್ಮಿಸಿದ ಯಾವ ಯಾವ ಬಡಾವಣೆಗಳು ಮೂಲಭೂತ ಸವಲತ್ತುಗಳ ಕೊರತೆ ಎದುರಿಸುತ್ತಿದೆ; | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ಬಡಾವಣೆಗಳನ್ನು ಅಭಿವೃದ್ಧಿಪಡಿಸಲು ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ಹಾಗೂ ನಾಡಪ್ರಭು ಕೆಂಪೇಗೌಡ ವಿಭಾಗಗಳಿರುತ್ತವೆ,<br><br>**ಪೂರ್ವ** ವಿಭಾಗದ ಬಡಾವಣೆಗಳಲ್ಲಿ ಮೂಲ ಭೂತ ಸೌಕರ್ಯಗಳನ್ನು ಕಲ್ಪಿಸಿ ಬಡಾವಣೆಗಳನ್ನು ಮುಂದಿನ ನಿರ್ವಹಣೆಗಾಗಿ ಬಿ.ಬಿ.ಎಂ.ಪಿ ಗೆ ಹಸ್ತಾಂತರಿಸಲಾಗಿದೆ.<br><br>**ಉತ್ತರ** ವಿಭಾಗದ ವ್ಯಾಪ್ತಿಯಲ್ಲಿ ಬರುವ ಹಳೆಯ ಬಡಾವಣೆಗಳಲ್ಲಿ ಮೂಲ ಭೂತ ಸೌಕರ್ಯಗಳನ್ನು ಕಲ್ಪಿಸಿ ಬಡಾವಣೆಗಳನ್ನು ಮುಂದಿನ ನಿರ್ವಹಣೆಗಾಗಿ ಬಿ.ಬಿ.ಎಂ.ಪಿ ಗೆ ಹಸ್ತಾಂತರಿಸಲಾಗಿದೆ. ಪ್ರಾಧಿಕಾರದಡಿಯಲ್ಲಿರುವ ಅರ್ಕಾವತಿ ಬಡಾವಣೆಯಲ್ಲಿ ಈಗಾಗಲೇ ಮೂಲ ಭೂತ ಸೌಕರ್ಯಗಳಾದ ರಸ್ತೆ, ನೀರು ಸರಬರಾಜು ಮತ್ತು ಒಳ ಚರಂಡಿ, ವಿದ್ಯುತ್ ಕಾಮಗಾರಿ ಪ್ರಗತಿಯಲ್ಲಿರುತ್ತದೆ.<br><br>**ಪಶ್ಚಿಮ** ವಿಭಾಗದ ವ್ಯಾಪ್ತಿಯಲ್ಲಿ ಬರುವ ಹಳೆಯ ಬಡಾವಣೆಗಳಲ್ಲಿ ಮೂಲ ಭೂತ ಸೌಕರ್ಯಗಳನ್ನು ಕಲ್ಪಿಸಿ ಬಡಾವಣೆಗಳನ್ನು ಮುಂದಿನ ನಿರ್ವಹಣೆಗಾಗಿ ಬಿ.ಬಿ.ಎಂ.ಪಿ ಗೆ ಹಸ್ತಾಂತರಿಸಲಾಗಿದೆ. ಪ್ರಾಧಿಕಾರದಡಿಯಲ್ಲಿರುವ ಸರ್.ಎಂ.ವಿಶ್ವೇಶ್ವರಯ್ಯ ಬಡಾವಣೆಯಲ್ಲಿ ಈಗಾಗಲೇ ಮೂಲ ಭೂತ ಸೌಕರ್ಯಗಳಾದ ರಸ್ತೆ, ನೀರು ಸರಬರಾಜು ಮತ್ತು ಒಳ ಚರಂಡಿ ಹಾಗೂ ವಿದ್ಯುತ್ತಿನ ಅನುಕೂಲತೆಗಳನ್ನು ಶೇ. 90 ರಷ್ಟು ಪೂರ್ಣಗೊಳಿಸಿದ್ದು ಉಳಿದ ಕಾಮಗಾರಿಗಳು ಪ್ರಗತಿಯಲ್ಲಿರುತ್ತದೆ. |

**ನಾಡಪ್ರಭು ಕೆಂಪೇಗೌಡ ಬಡಾವಣೆ** ರಚಿಸುವ ಕಾಮಗಾರಿಯು ನಿರ್ಮಾಣ ಹಂತದಲ್ಲಿದ್ದು, ಈಗಾಗಲೇ ಮೂಲ ಭೂತ ಸೌಕರ್ಯಗಳಾದ ರಸ್ತೆ, ನೀರು ಸರಬರಾಜು ಮತ್ತು ಒಳ ಚರಂಡಿ, ವಿದ್ಯುತ್ ಕಾಮಗಾರಿ ಪ್ರಗತಿಯಲ್ಲಿರುತ್ತದೆ.

**ದಕ್ಷಿಣ ವಿಭಾಗದ** ವ್ಯಾಪ್ತಿಯಲ್ಲಿ ಬರುವ ಹಳೆಯ ಬಡಾವಣೆಗಳಲ್ಲಿ ಮೂಲ ಭೂತ ಸೌಕರ್ಯಗಳನ್ನು ಕಲ್ಪಿಸಿ ಬಡಾವಣೆಗಳನ್ನು ಮುಂದಿನ ನಿರ್ವಹಣೆಗಾಗಿ ಬಿ.ಬಿ.ಎಂ.ಪಿ ಗೆ ಹಸ್ತಾಂತರಿಸಲಾಗಿದೆ. ಪ್ರಾಧಿಕಾರದಡಿಯಲ್ಲಿರುವ ಜೆ.ಪಿ.ನಗರ 8ನೇ ಫೇಸ್ ಬಡಾವಣೆಯಲ್ಲಿ ಮೂಲ ಭೂತ ಸೌಕರ್ಯಗಳನ್ನು ಒದಗಿಸಲಾಗಿರುತ್ತದೆ.

**ಬನಶಂಕರಿ 6ನೇ ಹಂತದ ಬಡಾವಣೆಗಳು 1 ರಿಂದ 11ನೇ ಬ್ಲಾಕ್ ರಲ್ಲಿ** ಪ್ರಾಧಿಕಾರದ ವತಿಯಿಂದ ಕುಡಿಯುವ ನೀರಿನ ಮತ್ತು ಒಳಚರಂಡಿ ವ್ಯವಸ್ಥೆಗಾಗಿ ಕೊಳವೆಗಳನ್ನು ಅಳವಡಿಸಲಾಗಿರುತ್ತದೆ. ಬೆಂಗಳೂರು ಜಲಮಂಡಳಿ ವತಿಯಿಂದ ನೆಲಮಟ್ಟದ ನೀರು ಸಂಗ್ರಹಣಾ ತೊಟ್ಟಿಯ ನಿರ್ಮಾಣ ಕಾಮಗಾರಿ ಪ್ರಗತಿಯಲ್ಲಿದ್ದು ಪೂರ್ಣಗೊಂಡ ನಂತರ ಸಂಪರ್ಕ ಕಲ್ಪಿಸಬೇಕಾಗಿರುತ್ತದೆ.

**ಮುಂದುವರೆದ ಬನಶಂಕರಿ 6ನೇ ಹಂತದ ಬಡಾವಣೆಗಳು (4ನೇ ಬಿ, ಹೆಚ್ ಮತ್ತು ಟಿ ಬ್ಲಾಕ್ ಬಡಾವಣೆಗಳು) :-** ಬೆಂಗಳೂರು ಜಲಮಂಡಳಿ ವತಿಯಿಂದ ಕಾವೇರಿ ಕುಡಿಯುವ ನೀರಿಗಾಗಿ ಕೊಳವೆ ಮಾರ್ಗಗಳನ್ನು ಅಳವಡಿಸುವ ಕಾರ್ಯ ಪ್ರಗತಿಯಲ್ಲಿರುತ್ತದೆ. ಮುಂದುವರೆದು, ಒಳಚರಂಡಿ ವ್ಯವಸ್ಥೆ ಮತ್ತು STP ನಿರ್ಮಾಣದ ಡಿಪಿಆರ್‌ನ್ನು ಪರಿಷ್ಕೃತಗೊಳಿಸಿ ಸಲ್ಲಿಸುವಂತೆ ಬೆಂಗಳೂರು ಜಲಮಂಡಳಿಯವರನ್ನು ಕೋರಿದ್ದು ಪರಿಷ್ಕೃತ ಡಿಪಿಆರ್‌ನ್ನು ಸಲ್ಲಿಸಿದ ನಂತರ ಪ್ರಾಧಿಕಾರದ ಸಭೆಯ ಅನುಮೋದನೆ ಪಡೆದು ಮುಂದಿನ ಕ್ರಮವಹಿಸಲಾಗುವುದು.

**ಅಂಜನಾಪುರ ಹಾಗೂ ಮುಂದುವರೆದ ಅಂಜನಾಪುರ ಬಡಾವಣೆಗಳು (1 ರಿಂದ 11ನೇ ಬ್ಲಾಕ್):-** ಸದರಿ ಬಡಾವಣೆಗಳಿಗೆ ಪ್ರಾಧಿಕಾರದ ವತಿಯಿಂದ ಕುಡಿಯುವ ನೀರಿನ ಮತ್ತು ಒಳಚರಂಡಿ ವ್ಯವಸ್ಥೆಗಾಗಿ ಕೊಳವೆಗಳನ್ನು ಅಳವಡಿಸಲಾಗಿರುತ್ತದೆ. ಬೆಂಗಳೂರು ಜಲಮಂಡಳಿ ವತಿಯಿಂದ ನೆಲಮಟ್ಟದ ನೀರು ಸಂಗ್ರಹಣಾ ತೊಟ್ಟಿಯ ನಿರ್ಮಾಣ ಕಾಮಗಾರಿ ಪ್ರಗತಿಯಲ್ಲಿದ್ದು ಪೂರ್ಣಗೊಂಡ ನಂತರ ಸಂಪರ್ಕ ಕಲ್ಪಿಸಬೇಕಾಗಿರುತ್ತದೆ ಹಾಗೂ STP ಯನ್ನು ನಿರ್ಮಾಣ ಮಾಡಬೇಕಾಗಿರುತ್ತದೆ. ಮುಂದುವರೆದು, ಬಡಾವಣೆ ನಿರ್ಮಾಣದ ಸಮಯದಲ್ಲಿ ರಸ್ತೆ ಹಾಗೂ ಮೂಲಭೂತ ಸೌಲಭ್ಯಗಳನ್ನು ಒದಗಿಸಲಾಗಿರುತ್ತದೆ. ಆದರೆ ಕೆಲವು ರಸ್ತೆಗಳನ್ನು ದುರಸ್ಥಿ ಮತ್ತು ನಿರ್ವಹಣೆ ಮಾಡಬೇಕಾಗಿದ್ದು, ದುರಸ್ಥಿಗೆ ಸಂಬಂಧಿಸಿದಂತೆ ಅಂದಾಜುಗಳನ್ನು ತಯಾರಿಸಿ

| | | |
|---|---|---|
| | | ಪ್ರಾಧಿಕಾರದ ಸಭೆಗೆ ಮಂಡಿಸಲಾಗಿದ್ದು, ಅನುಮೋದನೆಯಾದ ನಂತರ ಮುಂದಿನ ಕ್ರಮವಹಿಸಲಾಗುವುದು.<br><br>**ಜೆ.ಪಿ.ನಗರ 9ನೇ ಹಂತದ ಬಡಾವಣೆ :-** ಸದರಿ ಬಡಾವಣೆಗೆ ಪ್ರಾಧಿಕಾರದ ವತಿಯಿಂದ ರಸ್ತೆ ಹಾಗೂ ಮೂಲಭೂತ ಸೌಲಭ್ಯಗಳನ್ನು ಒದಗಿಸಲಾಗಿರುತ್ತದೆ. ಬೆಂಗಳೂರು ಜಲಮಂಡಳಿ ವತಿಯಿಂದ ಕುಡಿಯುವ ನೀರಿನ ಮತ್ತು ಒಳಚರಂಡಿ ವ್ಯವಸ್ಥೆಗಾಗಿ ಕೊಳವೆಗಳನ್ನು ಅಳವಡಿಸಲಾಗಿದ್ದು, ಇನ್ನೂ ಕೆಲವು ಭಾಗಗಳಲ್ಲಿ ಅಳವಡಿಸಬೇಕಾಗಿರುತ್ತದೆ. ಕಾಮಗಾರಿ ಪೂರ್ಣಗೊಂಡ ನಂತರ ಬೆಂಗಳೂರು ಜಲಮಂಡಳಿ ವತಿಯಿಂದ ಸಂಪರ್ಕ ಕಲ್ಪಿಸಬೇಕಾಗಿರುತ್ತದೆ. |
| ಇ) | ಅಂತಹ ಬಡಾವಣೆಗಳಲ್ಲಿ ಜನರಿಗೆ ಬೇಕಾದ ವಿಸ್ತಾರವಾದ ರಸ್ತೆ, ಶುದ್ಧ ಕುಡಿಯುವ ನೀರಿನ ಪೂರೈಕೆ, ಒಳಚರಂಡಿ ಹಾಗೂ ವಿದ್ಯುತ್ತಿನ ಅನುಕೂಲತೆ ಒದಗಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಈಗಾಗಲೇ ಮೇಲಿನಂತೆ ಬಹುತೇಕ ಬಡಾವಣೆಗಳಲ್ಲಿ ವಿಸ್ತಾರವಾದ ರಸ್ತೆ, ವಿದ್ಯುತ್ ಅನ್ನು ಕಲ್ಪಿಸಲಾಗಿದ್ದು, ಶುದ್ಧ ಕುಡಿಯುವ ನೀರಿನ ಪೂರೈಕೆ ಮತ್ತು ಒಳಚರಂಡಿ ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ. |
| ಈ) | ಬೆಂಗಳೂರು ನಗರದ ಕೆಲವು ಭಾಗಗಳು ಈಗಾಗಲೇ ದೊಡ್ಡ ಪ್ರಮಾಣದಲ್ಲಿ ಕುಡಿಯುವ ನೀರಿನ ಸಮಸ್ಯೆಯನ್ನು ಎದುರಿಸುತ್ತಿದ್ದು, ಹೊಸದಾಗಿ ನಿರ್ಮಿಸುತ್ತಿರುವ ಬಡಾವಣೆಗಳಿಗೆ ಯಾವ ಮೂಲಗಳಿಂದ ನೀರು ಒದಗಿಸಲು ಯೋಜನೆ ರೂಪಿಸಲಾಗಿದೆ? | ಪ್ರಾಧಿಕಾರದಿಂದ ಪ್ರಸ್ತುತ ನಾಡಪ್ರಭು ಕೆಂಪೇಗೌಡ ಬಡಾವಣೆ ನಿರ್ಮಿಸುತ್ತಿದ್ದು, ಸದರಿ ಬಡಾವಣೆಗೆ ಕಾವೇರಿ 5ನೇ ಹಂತದ ಯೋಜನೆಯಲ್ಲಿ ನೀರು ಪೂರೈಕೆಯನ್ನು ಪಡೆದುಕೊಳ್ಳಲಾಗುವುದು, ಈ ಸಂಬಂಧ ಬೆಂಗಳೂರು ಜಲಮಂಡಳಿ ರವರು ಒಪ್ಪಿಗೆ ಪತ್ರವನ್ನು ನೀಡಿರುತ್ತಾರೆ.<br><br>ಅರ್ಕಾವತಿ ಬಡಾವಣೆಗೆ ಸಂಬಂಧಿಸಿದಂತೆ ಕುಡಿಯುವ ನೀರು ಮತ್ತು ಒಳಚರಂಡಿ ಕಲ್ಪಿಸಲು ಯೋಜನಾ ವರದಿ ತಯಾರಿಸಲು ಬೆಂಗಳೂರು ಜಲಮಂಡಳಿ ಸಂಸ್ಥೆಗೆ ರೂ.75.00 ಲಕ್ಷಗಳ ತೇವಣಿ ನೀಡಲಾಗಿದೆ. |

ಸಂಖ್ಯೆ: ನಅಇ 61 ಬೆಂಭೂಸ್ವಾ 2020

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ